# ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : **691**
**ಸದಸ್ಯರ ಹೆಸರು** : ಶ್ರೀ ಕೆ.ಪ್ರತಾಪಚಂದ್ರ ಶೆಟ್ಟಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
**ಉತ್ತರಿಸಬೇಕಾದ ದಿನಾಂಕ** : 04.03.2021
**ಉತ್ತರಿಸುವ ಸಚಿವರು** : ಮುಖ್ಯಮಂತ್ರಿಗಳು

*****

| | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಕಳೆದ ಮೂರು ವರ್ಷಗಳಲ್ಲಿ ಮೆಸ್ಕಾಂ ವ್ಯಾಪ್ತಿಯಲ್ಲಿ ರೈತರ ಕೃಷಿ ಪಂಪು ಸೆಟ್‌ಗಳಿಗೆ ಮಾರ್ಗ ವಿಸ್ತರಣೆ ಯೋಜನೆಯಲ್ಲಿ ನೋಂದಾಯಿಸಲಾದ ಅರ್ಜಿಗಳ ಸಂಖ್ಯೆ ಎಷ್ಟು; ಅವುಗಳಲ್ಲಿ ಮೂಲಭೂತ ಸೌಕರ್ಯವನ್ನು ಕಲ್ಪಿಸಲು ಶುಲ್ಕವನ್ನು ಪಾವತಿಸಿದ ಅರ್ಜಿಗಳ ಸಂಖ್ಯೆ ಎಷ್ಟು; | ಕರ್ನಾಟಕ ಸರ್ಕಾರದ ಆದೇಶ ಸಂಖ್ಯೆ: ಇಎನ್ 41/ವಿಎಸ್‌ಸಿ2014/ಪಿ1 ದಿನಾಂಕ: 14.07.2014 ರನ್ವಯ ದಿನಾಂಕ 31.07.2012ರ ನಂತರ ಅನಧಿಕೃತವಾಗಿ ಸೇರ್ಪಡೆಗೊಂಡು ನೋಂದಾಯಿಸಿರುವ ಮತ್ತು ಹೊಸದಾಗಿ ನೋಂದಾಯಿಸಲ್ಪಡುವ ಪಂಪ್‌ಸೆಟ್‌ಗಳಿಗೆ ಹೊಸ ಸಂಪರ್ಕ / ಅನಧಿಕೃತ ಸಂಪರ್ಕವೆಂಬ ಭೇದವನ್ನು ತೆಗೆದುಹಾಕಿ ಒಟ್ಟಾರೆ ನೀರಾವರಿ ಪಂಪ್ ಸೆಟ್‌ಗಳ ವಿದ್ಯುತ್ ಸಂಪರ್ಕಕ್ಕೆ ರೈತರು ರೂ. 10,000/- ಶುಲ್ಕದ ಜೊತೆಗೆ ಠೇವಣಿ ಹಣವನ್ನು ಪಾವತಿಸಬೇಕಾಗಿರುತ್ತದೆ.<br>ಇದರಂತೆ, ಮ.ವಿ.ಸ.ಕಂ. ವ್ಯಾಪ್ತಿಯಲ್ಲಿ ನೋಂದಾಯಿಸಲಾದ ಅರ್ಜಿಗಳ ಸಂಖ್ಯೆ ಹಾಗೂ ಮೂಲಭೂತ ಸೌಕರ್ಯವನ್ನು ಕಲ್ಪಿಸಲು ಶುಲ್ಕವನ್ನು ಪಾವತಿಸಿದ ಅರ್ಜಿಗಳ ವಿವರಗಳನ್ನು **ಅನುಬಂಧ**ದಲ್ಲಿ ಒದಗಿಸಲಾಗಿದೆ. |
| ಆ) | ಈ ಶುಲ್ಕ ಪಾವತಿಸಿದ ರೈತರ ಜೇಷ್ಠತಾ ಪಟ್ಟಿಯನ್ನು ಪಾರದರ್ಶಕವಾಗಿಸಲು ಇಲಾಖೆಯಿಂದ ಕೈಗೊಂಡ ಕ್ರಮಗಳಾವುವು; ರೈತರು ಇಲಾಖಾ ವೆಬ್ ಸೆಟ್‌ಗಳ ಮೂಲಕ ಜೇಷ್ಠತೆಯನ್ನು ತಿಳಿಯಲು ಅವಕಾಶವನ್ನು ಕಲ್ಪಿಸಲಾಗಿದೆಯೇ; ಇಲ್ಲವಾದಲ್ಲಿ ಕಾರಣವೇನು; | ಶುಲ್ಕ ಪಾವತಿಸಿದ ರೈತರ ಜೇಷ್ಠತಾ ಪಟ್ಟಿಯನ್ನು ಪಾರದರ್ಶಕವಾಗಿಸಲು ಜೇಷ್ಠತಾ ಪಟ್ಟಿಯನ್ನು ಉಪ ವಿಭಾಗಗಳಲ್ಲಿ ಪ್ರತಿ ತಿಂಗಳು ತಯಾರಿಸಿ ನಾಮಫಲಕದಲ್ಲಿ ಪ್ರಕಟಿಸಲಾಗುತ್ತಿದೆ.<br>ಪ್ರಸ್ತುತ, ಇಲಾಖಾ ವೆಬ್ ಸೈಟ್‌ಗಳ ಮೂಲಕ ಜೇಷ್ಠತೆಯನ್ನು ತಿಳಿಯಲು ಅವಕಾಶ ಕಲ್ಪಿಸಿರುವುದಿಲ್ಲ. |
| ಇ) | ಈ ಮೂಲಭೂತ ಸೌಕರ್ಯವನ್ನು ಕಲ್ಪಿಸಲು ಶುಲ್ಕವನ್ನು ಪಾವತಿಸಿಕೊಂಡರೂ ಸಹಾ ಸಾಮಾಗ್ರಿಗಳನ್ನು ನೀಡದೇ ವರ್ಷಾನುಗಟ್ಟಲೇ ವಿದ್ಯುತ್ ಸಂಪರ್ಕವನ್ನು ನೀಡದಿರಲು ಕಾರಣವೇನು; ಇದರಿಂದ ರೈತರ ಕೃಷಿ ಚಟುವಟಿಕೆಗಳಿಗೆ ತೊಂದರೆಯಾಗಿ ಆರ್ಥಿಕ ನಷ್ಟವನ್ನು ಅನುಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಈ ಅರ್ಜಿಗಳಿಗೆ ಕಲ್ಪಿಸಲು ಕನಿಷ್ಟ ಕಾಲಮಿತಿಯನ್ನು ನಿಗದಿಪಡಿಸಲು ಇರುವ ತೊಡಕುಗಳೇನು? | ಮ.ವಿ.ಸ.ಕಂ. ವ್ಯಾಪ್ತಿಯಲ್ಲಿ ಮೂಲಭೂತ ಸೌಕರ್ಯವನ್ನು ಕಲ್ಪಿಸಲು ಶುಲ್ಕವನ್ನು ಪಾವತಿಸಿಕೊಂಡ ಕೂಡಲೇ ತಾಂತ್ರಿಕ ಸಾಧ್ಯತೆ ಇರುವಲ್ಲಿ ಹಾಲಿ ಇರುವ ಮೂಲಭೂತ ಸೌಕರ್ಯವನ್ನು ಬಳಸಿಕೊಂಡು ಸರ್ವಿಸ್ ಮುಖಾಂತರ ವಿದ್ಯುತ್ ಸಂಪರ್ಕ ನೀಡಲಾಗಿರುತ್ತದೆ.<br>ಉಳಿದಂತೆ, ಮಾರ್ಗ ವಿಸ್ತರಣೆ ಅವಶ್ಯವಿರುವ ಪಂಪುಸೆಟ್‌ಗಳಿಗೆ ಟೆಂಡರ್ ಪ್ರಕ್ರಿಯೆ ನಡೆಸಿ ಹಂತ-1 ಹಾಗೂ ಹಂತ-2ರಲ್ಲಿ ಗುತ್ತಿಗೆ ಆಧಾರದಲ್ಲಿ ಕಾಮಗಾರಿಯನ್ನು ಕೈಗೊಂಡು ಮೂಲಭೂತ ಸೌಕರ್ಯವನ್ನು ಒದಗಿಸಿ ವಿದ್ಯುತ್ ಸಂಪರ್ಕ ಕಲ್ಪಿಸಲಾಗಿರುತ್ತದೆ.<br>ಇನ್ನೂ ಬಾಕಿ ಉಳಿದಿರುವ ಪಂಪುಸೆಟ್‌ಗಳಿಗೆ ಶೀಘ್ರವಾಗಿ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಲು 3ನೇ ಹಂತದಲ್ಲಿ ಗುತ್ತಿಗೆ ಆಧಾರದಲ್ಲಿ ದರ ಒಪ್ಪಂದಗಳನ್ನು ನೀಡಲಾಗಿದ್ದು, ಕಾಮಗಾರಿಗಳು ಪ್ರಗತಿಯಲ್ಲಿವೆ. |

ಸಂಖ್ಯೆ: ಎನರ್ಜಿ 55 ಇಬಿಎಸ್ 2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

## ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಕೆ.ಪ್ರತಾಪಚಂದ್ರ ಶೆಟ್ಟಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 691 ಕ್ಕೆ ಅನುಬಂಧ

ಸರ್ಕಾರದ ಆದೇಶ ದಿನಾಂಕ 14.07.14ರಂತೆ ಜನವರಿ-21ರ ಅಂತ್ಯದವರೆಗೆ ನೋಂದಾವಣೆಗೊಂಡ/ ಮೂಲಭೂತ ಸೌಕರ್ಯ ಶುಲ್ಕ ಪಾವತಿಸಿ ವಿದ್ಯುತ್ ಸಂಪರ್ಕ ಕಲ್ಪಿಸಲಾದ ಕೃಷಿ ನೀರಾವರಿ ಪಂಪುಸೆಟ್ಟುಗಳ ವಿವರ

| ಕ್ರ.ಸಂ | ಜಿಲ್ಲೆ | ರೂ. 50/- ನೋಂದಣಿ ಶುಲ್ಕ ಪಾವತಿಸಿದ ಅರ್ಜಿಗಳ ಸಂಖ್ಯೆ | ರೂ.10,000/- ಪಾವತಿಸಿರುವ ಒಟ್ಟು ನೀರಾವರಿ ಪಂಪುಸೆಟ್ಟುಗಳ ಸಂಖ್ಯೆ | ರೂ.10,000/- ಪಾವತಿಸದೆ ಇರುವ ಒಟ್ಟು ನೀರಾವರಿ ಪಂಪುಸೆಟ್ಟುಗಳ ಸಂಖ್ಯೆ | ಮೂಲಭೂತ ಸೌಲಭ್ಯ ಕಲ್ಪಿಸಿ ವಿದ್ಯುತ್ ಸಂಪರ್ಕ ನೀಡಿರುವ ನೀರಾವರಿ ಪಂಪುಸೆಟ್ಟುಗಳ ಸಂಖ್ಯೆ | ಸರ್ವೀಸ್ ಮೇನ್ಸ್ ಮೂಲಕ ವಿದ್ಯುತ್ ಸಂಪರ್ಕ ನೀಡಿರುವ ನೀರಾವರಿ ಪಂಪುಸೆಟ್ಟುಗಳ ಸಂಖ್ಯೆ | ಮೂಲಭೂತ ಸೌಕರ್ಯ/ಸರ್ವೀಸ್ ಮೇನ್ಸ್ ಮೂಲಕ ವಿದ್ಯುತ್ ಸಂಪರ್ಕ ಕಲ್ಪಿಸಲು ಬಾಕಿ ಇರುವ ನೀರಾವರಿ ಪಂಪುಸೆಟ್ಟುಗಳ ಸಂಖ್ಯೆ |
|---|---|---|---|---|---|---|---|
| 1 | ದಕ್ಷಿಣ ಕನ್ನಡ | 37745 | 31949 | 5796 | 4311 | 27179 | 459 |
| 2 | ಉಡುಪಿ | 17358 | 14889 | 2469 | 2683 | 11847 | 359 |
| 3 | ಶಿವಮೊಗ್ಗ | 26454 | 21583 | 4871 | 11614 | 8899 | 1070 |
| 4 | ಚಿಕ್ಕಮಗಳೂರು | 23293 | 16164 | 7129 | 5267 | 4321 | 6576 |
| ಒಟ್ಟು | | **104850** | **84585** | **20265** | **23875** | **52246** | **8464** |